# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂ ಖ್ಯೆ : 74
2. ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪುರ
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೇಂದ್ರ ಸರ್ಕಾರವು ಮೂರು ಕೃಷಿ ಕಾಯ್ದೆಗಳನ್ನು ಅನುಷ್ಠಾನಗೊಳಿಸಿದ ನಂತರ ಎ.ಪಿ.ಎಂ.ಸಿ ಆದಾಯದಲ್ಲಿ ಕುಸಿತ ಕಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಳಕಂಡ ಕ್ರಮಗಳಿಂದ ರಾಜ್ಯದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಆದಾಯ ಕುಸಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆಗೆ ಆಗಿಂದಾಗ್ಗೆ ತಿದ್ದುಪಡಿ ತರಲಾಗಿದೆ. ಈ ಸಂಬಂಧ ಪರಿಗಣಿತವಾದ ಪ್ರಮುಖ ಅಂಶಗಳಲ್ಲಿ ರೈತರ ಹಿತಾಸಕ್ತಿ ಗಮನದಲ್ಲಿಡುವುದು, ಸ್ಪರ್ಧಾತ್ಮಕ ವಾತಾವರಣ ನಿರ್ಮಿಸುವುದು, ಎಪಿಎಂಸಿಗಳ ಏಕಸ್ವಾಮ್ಯತೆಯನ್ನು ತೆಗೆದುಹಾಕುವುದು ಹಾಗೂ ರೈತರು ಯಾವುದೇ ಮಾರುಕಟ್ಟೆಗಳಿಗೆ ಅಥವಾ ಯಾವುದೇ ವ್ಯಕ್ತಿಗಳಿಗೆ ತಮ್ಮ ಉತ್ಪನ್ನವನ್ನು ಮಾರಾಟ ಮಾಡಲು ಸ್ವಾತಂತ್ರ್ಯ ನೀಡುವುದರ ಮೂಲಕ ಯೋಗ್ಯ ಧಾರಣೆ ದೊರೆಯಲು ಅವಕಾಶ ಕಲ್ಪಿಸುವ ವ್ಯವಸ್ಥೆ ಜಾರಿಗೆ ತರಬೇಕೆಂಬುದಾಗಿದೆ.<br><br>ಈ ನಿಟ್ಟಿನಲ್ಲಿ ಜಾರಿಗೊಳಿಸಿದ ತಿದ್ದುಪಡಿ ಕಾಯ್ದೆಯಡಿ ಮಾರುಕಟ್ಟೆ ಸಮಿತಿಗಳ ನಿಯಂತ್ರಣವನ್ನು ಪ್ರಾಂಗಣಕ್ಕೆ ಸೀಮಿತಗೊಳಿಸಿ ಮಾರುಕಟ್ಟೆ ಪ್ರಾಂಗಣದ ಹೊರಗಿನ ಪ್ರದೇಶವನ್ನು ಟ್ರೇಡ್ ಏರಿಯಾ ಎಂದು ನಿಗದಿಪಡಿಸಿದ್ದು, ಈ ಟ್ರೇಡ್ ಏರಿಯಾದಲ್ಲಿ ನಡೆಯುವ ವ್ಯಾಪಾರ ವಹಿವಾಟಿಗೆ ಯಾವುದೇ ಶುಲ್ಕ ವಿಧಿಸುವುದನ್ನು ನಿರ್ಬಂಧಿಸಲಾಗಿರುತ್ತದೆ.<br><br>ರಾಜ್ಯ ಸರ್ಕಾರವು ಲೈಸೆನ್ಸ್ ಪಡೆದು ಮಾರುಕಟ್ಟೆ ಪ್ರಾಂಗಣದ ಒಳಗೆ ವ್ಯಾಪಾರ ವಹಿವಾಟು ನಡೆಸುವ ವರ್ತಕರುಗಳಿಗೂ ಸಮಾನ ಅವಕಾಶ ಕಲ್ಪಿಸುವ ದೃಷ್ಟಿಯಿಂದ ದಿನಾಂಕ:04.08.2020 ರಿಂದ ದಿನಾಂಕ:02.01.2021ರ ಅವಧಿಯಲ್ಲಿ ಮಾರುಕಟ್ಟೆ ಶುಲ್ಕದ ದರವನ್ನು ಶೇ.1.5 ರಿಂದ ಶೇ.0.35, ಶೇ.1 ಮತ್ತು ಶೇ.0.60ಕ್ಕೆ ಮರು ನಿಗದಿಪಡಿಸಿ ಆದೇಶಿಸಲಾಗಿದ್ದು, ಪ್ರಸ್ತುತ ಮಾರುಕಟ್ಟೆ ಶುಲ್ಕದ ದರ ಶೇ.0.60 ಜಾರಿಯಲ್ಲಿರುತ್ತದೆ.<br><br>ರಾಜ್ಯ ಸರ್ಕಾರವು ಕೈಗೊಂಡ ತಿದ್ದುಪಡಿಯ ಪರಿಣಾಮವಾಗಿ ಮಾರುಕಟ್ಟೆ ಪ್ರಾಂಗಣದ ಹೊರಗೆ ಮಾರುಕಟ್ಟೆ ಕ್ಷೇತ್ರದಲ್ಲಿ ಕೈಗೊಳ್ಳುವಂತಹ ಕೃಷಿ ಉತ್ಪನ್ನಗಳ ಖರೀದಿ ಮೇಲೆ ವಿಧಿಸುತ್ತಿದ್ದ ಮಾರುಕಟ್ಟೆ ಶುಲ್ಕ ನಿಂತ ಮತ್ತು ಮಾರುಕಟ್ಟೆ ಶುಲ್ಕದ ದರವನ್ನು ಮರು ನಿಗದಿಪಡಿಸಿದ ಎರಡು ಕಾರಣಗಳಿಂದಾಗಿ ಮಾರುಕಟ್ಟೆಗಳ ಆದಾಯದಲ್ಲಿ ಕುಸಿತ ಕಂಡಿರುತ್ತದೆ. |

| | | |
|---|---|---|
| (ಆ) | ಹೌದಾದಲ್ಲಿ, ಕೇಂದ್ರದ ಮಾದರಿಯಂತೆ ರಾಜ್ಯದಲ್ಲೂ ಮಾರಕವಾದ ಈ ಕೃಷಿ ಕಾಯ್ದೆಗಳನ್ನು ವಾಪಸ್ಸು ಪಡೆಯಲಾಗುವುದೇ? (ವಿವರ ನೀಡುವುದು) | ಕೇಂದ್ರ ಸರ್ಕಾರವು ಜಾರಿಗೊಳಿಸಿದ್ದ 3 ಹೊಸ ಕೃಷಿ ಕಾಯ್ದೆಗಳನ್ನು ಹಿಂದಕ್ಕೆ ಪಡೆದಿರುವುದು ಸರ್ಕಾರದ ಗಮನದಲ್ಲಿರುತ್ತದೆ.<br><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966 ರಾಜ್ಯದ ಸ್ವತಂತ್ರ ಕಾಯ್ದೆಯಾಗಿದ್ದು, ಅದರ ಅಡಿ ನೀತಿ ನಿಯಮಗಳನ್ನು ಮಾಡುವ ಪೂರ್ಣ ಅಧಿಕಾರ ರಾಜ್ಯಕ್ಕೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಈ ಹಿಂದೆ ಸದರಿ ಅಧಿನಿಯಮ ಕಲಂ 8(2), ಕಲಂ 8(3) ಮತ್ತು 117ಕ್ಕೆ ದಿನಾಂಕ: 31.12.2020ರಂದು ತರಲಾಗಿರುವ ತಿದ್ದುಪಡಿಯನ್ನು ರಾಜ್ಯದ ಹಿತಾಸಕ್ತಿಗಳಿಗೆ ಅನುಗುಣವಾಗಿ ಪರಿಗಣಿಸಲಾಗುವುದು. ಸದರಿ ತಿದ್ದುಪಡಿಯ ಅನುಕೂಲ ಹಾಗೂ ಅನಾನುಕೂಲಗಳನ್ನು ಗಮನದಲ್ಲಿಟ್ಟುಕೊಂಡು ಸೂಕ್ತ ನಿರ್ಧಾರ ಕೈಗೊಳ್ಳಲಾಗುವುದು. |

ಸಂಖ್ಯೆ: ಸಿಒ 26 ಎಂಆರ್‌ಇ 2022

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು